ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 13 ನೇ ಮಾರ್ಚ್, 2020

ಶಿವಮೊಗ್ಗ ಹಾಗೂ ದಾವಣಗೆರೆ ಜಿಲ್ಲೆಯ ಹೊನ್ನಾಳಿ ಮತ್ತು ಚನ್ನಗಿರಿ ತಾಲ್ಲೂಕುಗಳಲ್ಲಿರುವ ಶುದ್ಧ ಕುಡಿಯುವ ನೀರಿನ ಘಟಕಗಳ ಕುರಿತು

ಶ್ರೀ ಆರ್. ಪ್ರಸನ್ನಕುಮಾರ್(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

129 (923) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಶಿವಮೊಗ್ಗ ಹಾಗೂ ದಾವಣಗೆರೆ ಜಿಲ್ಲೆಯ ಹೊನ್ನಾಳಿ ಮತ್ತು ಚನ್ನಗಿರಿ ತಾಲ್ಲೂಕುಗಳಲ್ಲಿ ಮಂಜೂರು ಆಗಿರುವ ಶುದ್ಧ ಕುಡಿಯುವ ನೀರಿನ ಘಟಕಗಳ ಸಂಖ್ಯೆ ಎಷ್ಟು ; ಕಾರ್ಯಾರಂಭ ಮಾಡಿರುವ ಘಟಕಗಳ ಸಂಖ್ಯೆ ಎಷ್ಟು ; ನಿರ್ಮಾಣ ಹಂತದಲ್ಲಿರುವ ಘಟಕಗಳ ಸಂಖ್ಯೆ ಎಷ್ಟು ; ಸದರಿ ಘಟಕಗಳಿಗೆ ಬಿಡುಗಡೆಯಾಗಿರುವ, ಖರ್ಚಾದ ಹಾಗೂ ಬಾಕಿ ಇರುವ ಅನುದಾನವೆಷ್ಟು; (ತಾಲ್ಲೂಕುವಾರು ಮತ್ತು ಗ್ರಾಮಪಂಚಾಯಿತಿವಾರು, ಪ್ರತಿ ಘಟಕದ ವಿವರ ನೀಡುವುದು)

(ಆ) ಶಿವಮೊಗ್ಗ ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ಶುದ್ಧ ಕುಡಿಯುವ ನೀರಿನ ಘಟಕ ಯೋಜನೆಯಲ್ಲಿ ಎಷ್ಟು ಘಟಕಗಳನ್ನು ಮಂಜೂರು ಮಾಡಲಾಗಿದೆ ; (ತಾಲ್ಲೂಕುವಾರು ವಿವರ ನೀಡುವುದು)

(ಇ) ಇದುವರೆಗೂ ಎಷ್ಟು ಘಟಕಗಳನ್ನು ಸ್ಥಾಪಿಸಲಾಗಿದೆ ; ಈ ಘಟಕಗಳಿಗೆ ಬಿಡುಗಡೆಯಾದ ಹಣವೆಷ್ಟು ;

(ಈ) ಇನ್ನುಳಿದ ಘಟಕಗಳ ಸ್ಥಾಪನೆಗೆ ಹಣ ಬಿಡುಗಡೆ ಮಾಡಲಾಗಿದೆಯೇ ; ಈ ಘಟಕಗಳನ್ನು ಸ್ಥಾಪಿಸಲು ಬೇಕಾಗುವ ಕಾಲಾವಧಿ ಎಷ್ಟು ;

(ಉ) ಈಗಾಗಲೇ ನಿರ್ಮಿಸಿರುವ ಶುದ್ಧ ಕುಡಿಯುವ ನೀರಿನ ಘಟಕಗಳಲ್ಲಿ ದುರಸ್ಥಿಗೆ ಬಂದಿರುವ ಘಟಕಗಳು ಎಷ್ಟು ; ಸಂಪೂರ್ಣ ಹಾಳಾಗಿರುವ ಘಟಕಗಳ ಸಂಖ್ಯೆ ಎಷ್ಟು ; ದುರಸ್ಥಿ ಕ್ರಮ ಕೈಗೊಳ್ಳಲು ಜಿಲ್ಲಾವಾರು ಪ್ರತ್ಯೇಕ ಘಟಕಗಳನ್ನು ರಚಿಸಲಾಗಿದೆಯೇ ?